ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

2018-19ನೇ ಸಾಲಿನಲ್ಲಿನ ಆಯವ್ಯಯದ ಕಾರ್ಯಕ್ರಮಗಳ ಬಗ್ಗೆ

ಶ್ರೀ ನಸೀರ್ ಅಹ್ಮದ್ (ವಿಧಾನಸಭೆಯಿಂದ ಚುನಾಯಿತರಾದವರು) :-

659 (760) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃ ತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2018-19ನೇ ಆಯವ್ಯಯದಲ್ಲಿ ಮಂಡಿಸಿರುವಂತೆ ಪ್ರವಾಸೋದ್ಯಮ ವಲಯದ ಆತಿಥ್ಯ ಕ್ಷೇತ್ರದಲ್ಲಿ ಉದ್ಯೋಗಾ-ವಕಾಶಗಳನ್ನು ಸೃಜಿಸಲು ಕೌಶಲ್ಯಾಭಿವೃದ್ಧಿ, ಪ್ರವಾಸಿ ಮಾರ್ಗದರ್ಶಿ ತರಬೇತಿ ಕಾರ್ಯಕ್ರಮ ಹಾಗೂ ಪ್ರವಾಸಿ ಟ್ಯಾಕ್ಸಿ ಚಾಲಕರಿಗೆ ರಿಫ್ರೆಷರ್ ಕೋರ್ಸ್‌ಗಳ ಮೂಲಕ ತರಬೇತಿ ನೀಡಲು ಉದ್ದೇಶಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಈ ಸೌಲಭ್ಯಗಳನ್ನು ಅನುಷ್ಠಾನಕ್ಕೆ ತರಲಾಗಿದೆಯೇ;

(ಇ) ಈ ಸೌಲಭ್ಯ ಇನ್ನೂವರೆಗೂ ಅನುಷ್ಠಾನಕ್ಕೆ ತರದೆ ಇದ್ದಲ್ಲಿ, ಯಾವಾಗಿನಿಂದ ಜಾರಿಗೆ ತರಲಾಗುವುದು? (ಸಂಪೂರ್ಣ ವಿವರ ನೀಡುವುದು)